# ಪಂಚಮ

ಎಲ್ಲ ಬಗೆಯ ಆರ್ಥಿಕ, ಧಾರ್ಮಿಕ ಸಾಮಾಜಿಕ, ಬೌದ್ಧಿಕ ದಬ್ಬಾಳಿಕೆಯ ವಿರುದ್ಧ ದಲಿತರಲ್ಲಿ ಪ್ರಜ್ಞೆ ಮೂಡಿಸಲು ಯತ್ನಿಸುತ್ತಿರುವ ಪಂಚಮಕ್ಕೆ ಚಂದಾದಾರರಾಗಿರಿ. ಲೇಖನ-ಸುದ್ದಿ ಕಳುಹಿಸುವ ಮೂಲಕ ನೋವುಳ್ಳವರ ನುಡಿಯಾಗಿರುವ ಪಂಚಮವನ್ನು ನಿಮ್ಮ ದನಿಯನ್ನಾಗಿಸಿಕೊಳ್ಳಿ.

ಸಂಪುಟ: 4 ಸಂಚಿಕೆ: 1 5, ಜನವರಿ 1980 ಪಾಕ್ಷಿಕ ಬೆಲೆ: 20 ಪೈಸೆ ವಾರ್ಷಿಕ ಚಂದಾ 5 ರೂ. ಗಳು

## ಮೂಡಿಗೆರೆ: ಪೋಲೀಸರಿಂದ ದಲಿತ ಕಾರ್ಮಿಕನ ಕೊಲೆ

[ಪಂಚಮ ಪ್ರತಿನಿಧಿಯಿಂದ]

ಚಿಕ್ಕಮಗಳೂರು ಜಿಲ್ಲೆ ಮೂಡಿಗೆರೆ ಪೋಲಿಸರಿಬ್ಬರು ಕಳೆದ ನವೆಂಬರ್ 24ರಂದು ಕಾರ್ಮಿಕನೊಬ್ಬನನ್ನು ಅಮಾನ-ಷವಾಗಿ ಹೊಡೆದು ಕೊಂದಿದ್ದಾರೆ.

ಕೊಲೆಗೀಡಾದ ದಲಿತ ಶಂಭು ಮೂಡಿಗೆರೆ ತಾಲ್ಲೂಕಿನ ನಾಗಪಾಲ್ ಎಸ್ಟೇಟಿನ ಕಾರ್ಮಿಕ. ನ. 23ರಂದು ಎಸ್ಟೇಟಿನಲ್ಲೊಂದು ಕಾರ್ಮಿಕರ ನಡುವೆ ಜಗಳ ನಡೆಯಿತು. ಶಂಭು ಮಧ್ಯಸ್ಥಿಕೆ ವಹಿಸಿ ಜಗಳ ಬಿಡಿಸಿ ಅದನ್ನು ಇತ್ಯರ್ಥಗೊಳಿಸಿದ. ಈ ಜಗಳದ ಸುದ್ದಿ ಮಾಲೀಕನಿಗೆ ತಿಳಿಯದೆ ಕಾರ್ಮಿಕರ ನಡುವೆಯೇ ಇತ್ಯರ್ಥಗೊಂಡಿತು.

ಈ ಸುದ್ದಿ ತಿಳಿದ ಎಸ್ಟೇಟಿನ ಮಾಲೀಕ ಶ್ರೀಕಂಠ ಗೌಡನು "ಅವನೇನೂ (ಶಂಭು) ದೊಡ್ಡ ನಾಯಕನೇ ತೀರ್ಮಾನ ಮಾಡೋಕೆ, ನಾನಿರುವುದೇಕೆ?" ಎಂದು ಕುಪಿತಗೊಂಡು ಕೂಡಲೇ ಪೋಲೀಸ್ ಠಾಣೆಗೆ ಫೋನ್ ಮಾಡಿ ಪೋಲೀಸರನ್ನು ಕರೆತರಲು ತನ್ನ ಕಾರನ್ನು ಕಳುಹಿಸಿದ. ಉಳ್ಳವರ ಹಿತಕಾಯುವ ಪೋಲೀಸ್ ನಿಷ್ಠೆಯಿಂದ ಇಬ್ಬರು ಪೇದೆಗಳನ್ನು ತತ್‌ಕ್ಷಣವೇ ಎಸ್ಟೇಟಿಗೆ ಕಳುಹಿಸಿತು.

**ಕಪಾಳಕ್ಕೆ ಹೊಡೆತ:**

ಎಸ್ಟೇಟಿಗೆ ಬಂದ ಪೋಲೀಸರು ಏನೂ ವಿಚಾರಿಸದೆ ಶಂಭುವಿನನ್ನು ಕರೆದು ಅಲ್ಲಿ ಎರಡು ಕಪಾಳಗಳಿಗೂ ಬಲವಾಗಿ ಹೊಡೆದರು. ಹೊಡೆತದ ಪೆಟ್ಟಿನಿಂದ ಶಂಭು ಕುಸಿದು ಜೀವಬಿಡುವ ಸ್ಥಿತಿಯಲ್ಲಿ ಒದ್ದಾಡಿದ. ಶಂಭುವಿನ ಹೆಂಡತಿಯನ್ನು ಕರೆದು "ಅವ್ನ ಬಾಯ್ಗಿ ನೀರ್ಬುಡು" ಎಂದು ಪೋಲಿಸರು ಆಜ್ಞಾಪಿಸಿದರು. ಅಷ್ಟರಲ್ಲಿ ಶಂಭು ಸತ್ತುಹೋಗಿದ್ದ.

ಎಸ್ಟೇಟ್ ಮಾಲೀಕನ ಪಿತೂರಿಯಿಂದ ನಡೆದ ಪೋಲೀಸರ ಈ ಅಮಾನುಷ ಕೃತ್ಯವನ್ನು ಪ್ರತಿಭಟಿಸಲಾರದೆ ಕಾರ್ಮಿಕರು ಕಣ್ಣಾರೆಕಂಡು ಬೆಪ್ಪಾಗಿ ನಿಂತಿದ್ದರು.

ಶಂಭು ಸತ್ತುಹೋದ ಬಗ್ಗೆ "ನನ್ನನ್ನು ಕಡೆಗಣಿಸಿದವರಿಗೆ ಇದೇ ಬಾಳು" ಎಂದು ಎಸ್ಟೇಟ್ ಮಾಲೀಕ ಗತ್ತಿನಲ್ಲಿ ಗುಡುಗಿದ. ಶವವನ್ನು ಶವಪರೀಕ್ಷೆಗಾಗಿ ಶ್ರೀಕಂಠಗೌಡನ ಕಾರಿನಲ್ಲೇ ಎಂ.ಜಿ.ಎಂ. ಆಸ್ಪತ್ರೆಗೆ ಕೊಂಡೊಯ್ಯಲಾಯಿತು.

**ಶವ ಮೆರವಣಿಗೆ-ಪ್ರತಿಭಟನೆ:**

ಹಾಡುಹಗಲಲ್ಲೇ ಕಾರ್ಮಿಕರ ಕಣ್ಣೆದುರುಗೇ ನಡೆದ ಈ ಅಮಾನವೀಯ ಕೊಲೆ ಘಟನೆಯನ್ನು ಖಂಡಿಸಲು ಮತ್ತು ಕೊಲೆಗೆ ಪ್ರೇರಿತನಾದ ಶ್ರೀಕಂಠಗೌಡ ಹಾಗೂ ಕೊಲೆಗಡುಕ ಪೋಲೀಸರನ್ನು

[6ನೇ ಪುಟ ನೋಡಿ]

## ಕತ್ರಾಗುಪ್ಪ: 3 ದಿನ ದಲಿತರಿಗೆ ಅಸ್ಪೃಶ್ಯತಾ ಗೃಹಬಂಧನ

ಆನೇಕಲ್ ತಾಲ್ಲೂಕು ಕತ್ರಾಗುಪ್ಪ ಗ್ರಾಮದಲ್ಲಿ 48 ಕುಟುಂಬಗಳಿರುವ ಹರಿಜನರು ಡಿಸೆಂಬರ್ 18, 19 ಮತ್ತು 20ರಂದು ತಮ್ಮ ಮನೆಗಳಿಂದ ಹೊರಗೆ ಕಾಲಿಡಲಾಗದ ದುಸ್ಥಿತಿಯಲ್ಲಿ ಕಾಲಕಳೆಯಬೇಕಾಯಿತು. ಬಾವಿಯಿಂದ ನೀರು ತರುವ ಸ್ಥಿತಿಯಲ್ಲೂ ಇರಲಿಲ್ಲ. ಮಲ-ಮೂತ್ರ ವಿಸರ್ಜನೆಯನ್ನು ತಮ್ಮ ತಮ್ಮ ಮನೆಯೊಳಗೇ ಮಾಡಿಕೊಳ್ಳುವ ಅನಿವಾರ್ಯತೆ ಅವರಿಗೆ ಒದಗಿ ಒಂದು ರೀತಿಯ "ಅಸ್ಪೃಶ್ಯತೆ ಗೃಹ ಬಂಧನ"ದಲ್ಲಿದ್ದರು.

ಈ 'ಗೃಹಬಂಧನ' ವಿಧಿಸಿದ್ದು ಅಸ್ಪೃಶ್ಯತೆ-ಬಡತನ. ತಮ್ಮ ಮನೆಗಳಿಂದ ಆ ದಿನಗಳಂದು ಹರಿಜನರು ಹೊರಗೆಬಂದಿದ್ದರೆ ಜೀವಕಳೆದುಕೊಳ್ಳಬೇಕಾಗಿತ್ತು.

ಕಳೆದ ಕೆಲವು ದಿನಗಳಿಂದ ಹರಿಜನರಿಗೂ ಊರಿನ ಸವರ್ಣೀಯರಿಗೂ ಕಲಹ ಉಂಟಾಯಿತು. ಹರಿಜನರ ಕೇರಿಯ ಸುತ್ತಲೂ ಸವರ್ಣೀಯರ ಜಮೀನು ಇದೆ. ಎತ್ತ ಹೆಜ್ಜೆ ಇಟ್ಟರು ಅವರ ಜಮೀನಿನ ಮೇಲೆಯೇ ನಡೆದು ಹೋಗಬೇಕು. ಹೀಗಾಗಿ ಸವರ್ಣೀಯರು ತಮ್ಮ ಜಮೀನಿನ ಮೇಲೆ ಕಾಲಿಡಬಾರದೆಂದು, ಕಾಲಿಟ್ಟರೆ ಕೊಲೆ ಮಾಡುವುದಾಗಿ ಹರಿಜನರಿಗೆ ಬೆದರಿಕೆ ಹಾಕಿದ್ದರು. ಹೆದರಿದ ಹರಿಜನರು ತಮ್ಮ ಗುಡಿಸಲುಗಳೊಳಗೇ ನೀರಿಲ್ಲದೆ-ಮಲಮೂತ್ರ ಬಾಧೆಯಿಂದ ಎರಡುದಿನ ಮಿಲಿ ಮಿಲನೆ ಒದ್ದಾಡ ಬೇಕಾಯಿತು.

ಕೆಲವು ಕಾರ್ಮಿಕರು ತಮ್ಮ ಫ್ಯಾಕ್ಟರಿಗಳ ಕೆಲಸಕ್ಕೂ ಹೋಗದೆ ಮನೆಗಳಲ್ಲೇ ಉಳಿಯಬೇಕಾ

[3ನೇ ಪುಟ ನೋಡಿ]

## ತಿಂಗಳು ದಾಟಿದ ತಾತಗುಣಿ ದಲಿತ ಕಾರ್ಮಿಕರ ಧರಣಿ

ತಾತಗುಣಿ ಎಸ್ಟೇಟ್ ಮಾಲೀಕರಾದ ಸುಂದರ ಮುಖದ ಕಲಾವಿದರು ರೋರಿಚ್ ಮತ್ತು ಪತ್ನಿ ದೇವಿಕಾರಾಣಿ ಅನೇಕ ವರ್ಷಗಳಿಂದ ನಡೆಸಿಕೊಂಡು ಬರುತ್ತಿರುವ ಶೋಷಣೆ ವಿರುದ್ಧ ಅನೇಕ ತಿಂಗಳ ಹೋರಾಟವನ್ನು ವಿಸ್ತರಿಸಿಕೊಂಡು ಡಿಸೆಂಬರ್ 5 ರಂದು ಬೆಂಗಳೂರಿಗೆ ಬಂದು ವಿಧಾನ ಸೌಧದ ಮುಂದೆ ಧರಣಿ ನಡೆಸುತ್ತಿರುವ ದಲಿತ ಕಾರ್ಮಿಕರ ಹೋರಾಟ ಇನ್ನೂ ಯಾವುದೇ ಪರಿಹಾರ ಕಾಣದೆ ಒಂದು ತಿಂಗಳನ್ನು ದಾಟಿದೆ.

ಬೆಂಗಳೂರು ಜಿಲ್ಲಾ ರೈತಸಂಘದ ನೇತೃತ್ವದಲ್ಲಿ ಹೋರಾಟಕ್ಕಿಳಿದಿರುವ ಕಾರ್ಮಿಕರು ಯಶಸ್ವಿಗಳಿಸದ ಹೊರತು ತಾವು ಬೆಂಗಳೂರು ಬಿಟ್ಟು ಹೊರಡುವುದಿಲ್ಲವೆಂದು ನಿರ್ಧರಿಸಿದ್ದಾರೆ.

# ASSOCIATION TOOK THEIR FIGHT INTO FINANCE MINISTRY

*Dear Comrades,*

On 15-11-79 Gopal Prasad, Secretary of our Association and Mr. R. C. Arya, General Secretary, All India Banks, SC/ST Employees Federation met the joint Secretary and Section officer of Finance Department, New Delhi. The employees' side told blundly that the bank's report that" we have declared the result of the test exclusively conducted for SCs/STs in 1976 and the same was informed to the individual in writing" was false, so far as internal tests were concerned, The Ministry's side has taken serious note of it.

From the Ministry's side it was said that the bank was already in dialogue with the union regarding reservation in promotion and that as per Government of India's instructions issued in 1977 Bank might have the concurrence with the Union but it would not come in the way of Promotions of SC/ST employees. Mr. Gopal prasad enquired wether there was any directives to the bank from Government to implement the reservation policies. The Ministry's side replied that the instruction of Government already issued were directives and if the management had any doubt fresh directives could be issued.

The Management was trying to make us believe that confidential reports of Dalits were free from communal bias. To their utter disappointment instances of harassmente and ill-treatment of dalits are coming to light one after the other.

Mr. U. P. Ullikashi working as Peon in Hubli Branch is the son of a cobler. He was under suspension from 10-1-1978 on charges alleged to have been committed in 1976. The enquiry officer recommended for termination of his services and he has now been discharged from service inspite of the efforts of the Association. The entire proceedings were in English and his plea that he did not know English fell on deaf ears. He was not been given opportunities to defend himself by taking the assistance of a well informed colleague. The disciplinary proceedings coming so late and that too on cooked up charges revealed nothing but the communal prejudice of the management staff towards dalits. Another interesting thing that has come out of this episode is the double standard employed by the management while dealing with problems of dalits. when Proposing punishment the management says "the Bank is not prohibited under any of the bi-partite settlement or awards from having its own service code". But when Dalits demand reservation in promotion the management say that they are governed by bipartite settlements and awards. No management which has not taken leave of its senses would resort to such tactics to suppress the depressed classes like this any more.

For details of other cases wait for next issue.

We request our brothern who are working as Branch Secretaries of various trade unions to furnish the particulars about the particular union which they are belonged to and the name of the branch etc., the Information letter should be sent to our Association office immediately.

We regret to note that inspite of our repeated appeal to contribute generouly towards the court fees this response from our brothers was very poor Hence we once again request our brother to kindly send donation and contribution by means of D. D. of any bank in favour of our Association or by M.T to S. B. Account 8080 of Chickpet Branch, Bangalore.

OUR MEMBERS, WHO ARE THE BRANCH SECRETARIES OF VARIOUS TRADE UNIONS ESPECIALLY CANARA BANK EMPLOYEES UNION SHOULD INFORM US THE FOLLOWING URGENTLY:-

A) NAME

B) BRANCH

C) TRADE UNION

Yours
Executive Committee
All India Canara Bank SC/ST Employees Assn.
3rd Main, Gangenahally
Near HGN School, Hebbal
BANGALORE-560006

# ದಲಿತ ನುಡಿ

ಕಾಂಗ್ರೆಸ್ ಪಕ್ಷ (ಗಳು)ವು ಧಗಧಗನೆ ಉರಿಯುತ್ತಿರುವ ಮನೆ. ಅದನ್ನೆಂದೂ ಪ್ರವೇಶಿಸಬೇಡಿ. ಪ್ರವೇಶಿಸಿದ್ದೇ ಆದರೆ ನೀವೆಲ್ಲ (ದಲಿತರು) ಅದರಲ್ಲೇ ಸುಟ್ಟುಹೋಗುತ್ತೀರಿ.

—ಅಂಬೇಡ್ಕರ್

## ದಲಿತರಿಗೆಅಸ್ಪೃಶ್ಯತಾ ಗೃಹಬಂಧನ

[ಒಂದನೇ ಪುಟದಿಂದ]

ಯಿತು. ಕೆಲವರು ತಮ್ಮ ಜಮೀನಿನಲ್ಲಿ ಕಟಾವು ಮಾಡಿದ್ದ ಬೆಳೆಯನ್ನು ಮನೆಗೆ ಸಾಗಿಸುವ ಸ್ಥಿತಿಯಲ್ಲಿಲ್ಲದೆ ಬೆಳೆ ಜಮೀನಿನಲ್ಲೆ ಕೊಳೆಯಬೇಕಾಯಿತು.

48ಕುಟುಂಬಗಳ ಈ ಹರಿಜನರು ಎರಡು ಕೇರಿಗಳಲ್ಲಿದ್ದಾರೆ. ಮನೆಯಿಂದ ಹೊರಗೆ ಬಂದು ಬೋರ್‌ವೆಲ್‌ನಿಂದ ನೀರು ತೆಗೆವರೆ ಹೊಡೆಯುವುದಾಗಿ ಸವರ್ಣೀಯರು ಮಚ್ಚು, ದೊಣ್ಣೆ ಸಹಿತ ಕಾದಿದ್ದರು.

ಕಳೆದ ಕೆಲವು ದಿನಗಳ ಹಿಂದೆ ರತ್ನ ಎಂಬ ಬಾಲಕಿಯು ಸರ್ಕಾರದ ಬೋರ್‌ವೆಲ್‌ನಿಂದ ನೀರು ತೆಗೆದುಕೊಂಡು ಹೋಗಲು ಬಂದಾಗ ಚೆನ್ನಾಗಿ ಹೊಡೆದು ಬೈದರು. ಅಷ್ಟೇ ಅಲ್ಲದೆ ಊರಿನ ಸವರ್ಣೀಯ ಪಂಚಾಯತಿ ಸದಸ್ಯರು ಸಭೆನಡೆಸಿ ಬಾಲಕಿಯ ತಂದೆಗೆ 15ರೂ ದಂಡ ವಿಧಿಸಿದರು.

ಹರಿಜನರ ಈ ಸ್ಥಿತಿ ತಿಳಿದ ದಲಿತ ಸಂಘರ್ಷ ಸಮಿತಿ ಅಂತರ ರಾಜ್ಯ ಸಂಚಾಲಕ ಓ.ಶ್ರೀಧರನ್ ಮತ್ತಿತರ ಕಾರ್ಯಕರ್ತರು ಕತ್ರಾಗುಪ್ಪಕ್ಕೆ ತೆರಳಿ ಪೊಲೀಸ್ ಬಂದೋಬಸ್ತ್ ವ್ಯವಸ್ಥೆಗೊಳಿಸಿ ಅವರಿಗೆ ನೆರವಾದರು.

ಇದಿಷ್ಟು ಒಂದುಕಡೆಯಾದರೆ ಹರಿಜನರ ಅಷ್ಟಿಷ್ಟು ಜಮೀನುಗಳನ್ನು ಸವರ್ಣೀಯರು ಲಪಟಾಯಿಸುತ್ತಿದ್ದಾರೆ. ವಿಧವೆಯಲ್ಲಮ್ಮ ಮತ್ತು ಅಣ್ಣಯ್ಯಪ್ಪ ಎಂಬುವವರಿಗೆ ಸೇರಬೇಕಾಗಿರುವ ತೋಟಿ, ತಳವಾರಿಕೆಯಿಂದ ದೊರೆತ ಐದು ಎಕರೆ ಇನಾಂ ಜಮೀನನ್ನು ಸವರ್ಣೀಯರು ಅಕ್ರಮವಾಗಿ ಸಾಗುವಳಿ ಮಾಡತೊಡಗಿದ್ದಾರೆ.

ಹರಿಜನರು ಬಂಧನದ ಸಂಕಷ್ಟಕೀಡಾಯಿಗಿ ನರಳಿ ಕೊರಳಿ ಒದ್ದಾಡುತ್ತಿದ್ದ ಸಮಯದಲ್ಲೇ ಆನೇಕಲ್ ನಲ್ಲಿ ತಾಲ್ಲೂಕು ಅಭಿವೃದ್ಧಿ ಮಂಡಲಿ ಆಶ್ರಯದಲ್ಲಿ ಸಮಾಜಕಲ್ಯಾಣ ಇಲಾಖೆಯು "ಅಸ್ಪೃಶ್ಯತೆ ನಿವಾರಣೆ ಆಂದೋಲನ" ಸಭೆ ನಡೆಸಿತು!

## ಗುಳ್ಳಹಟ್ಟಿ ಕಾವಲ್ ದಲಿತರಿಗೆ ಭೂಮಿ ಹಂಚಿಕೆಯಾಗಲಿ

ಸುಮಾರು 25 ವರ್ಷದ ಹಿಂದೆ ರಾಮನಗರ ತಾಲ್ಲೂಕು ಬೈರಮಂಗಲ ಕೆರೆಯ ನಿರ್ಮಾಣದಿಂದ ಮುಳುಗಡೆಗೆ ತುತ್ತಾಗಿ ವಸತಿ ಕಳೆದುಕೊಂಡು ನಿರ್ಗತಿಕರಾಗಿ ಕೆಲವು ಗ್ರಾಮದ ದಲಿತರು ಕನಕಪುರ ತಾಲ್ಲೂಕು ಗುಳ್ಳಹಟ್ಟಿ ಕಾವಲ್ ಗ್ರಾಮದಲ್ಲಿ ಬಂದು ನೆಲಸಿದರು.

ಹೀಗೆ ವಲಸೆ ಬಂದ 200 ಕುಟುಂಬಗಳಿಗೆ ಸರ್ಕಾರ 1959ರಲ್ಲಿ ಪ್ರತಿ ಕುಟುಂಬಕ್ಕೆ ತಲಾ 4 ಎಕರೆಯಂತೆ ಒಟ್ಟು 800 ಎಕರೆ ಅರಣ್ಯ ಜಮೀನನ್ನು ಮಂಜೂರು ಮಾಡಿತು.

ಆದರೆ ದಲಿತ ವರ್ಗಕ್ಕೇ ಸೇರಿದ ಪ್ರಭಾವಿತ ಬಿ. ಸಿ. ಮಲ್ಲಯ್ಯ ಎಂಬಾತನು ದಲಿತರಿಗೇ ಮೋಸಮಾಡಿ ಮಂಜೂರಾದ ಜಮೀನಿಯಲ್ಲಿ ಸುಮಾರು 50 ಎಕರೆಯಷ್ಟನ್ನು ತಾನೇ ಅಕ್ರಮವಾಗಿ ಹಿಡುವಳಿ ಮಾಡುತ್ತ ಬಂದಿದ್ದಾನೆ.

ಈ 800 ಎಕರೆ ಭೂಮಿಯು ಗುಳ್ಳಹಟ್ಟಿ ಸ್ಟೇಟ್ ಫಾರೆಸ್ಟ್ ವಡ್ಡರ ಪಾಳ್ಯಕ್ಕೆ ಸೇರಿದುದು. ಅರಣ್ಯದಲ್ಲಿನ ಕಾಡನ್ನು ಕಡಿಯಲು ಅರಣ್ಯ ಅಧಿಕಾರಿಗಳು ಕತ್ತಾವಣೆಗೆ ನೀಡಲು ಮುಂದಾದರು. ಗ್ರಾಮದವರೇ ಸೇರಿ ಕತ್ತಾವಣೆ ಮಾಡೋಣವೆಂದು ಎಲ್ಲರ ಬಳಿ ತಲಾ 40 ರೂ. ನಂತೆ ಸುಮಾರು ಏಳೆಂಟು ಸಾವಿರ ರೂ. ಗಳನ್ನು ಬಿ.ಸಿ. ಮಲ್ಲಯ್ಯ ಸಂಗ್ರಹಿಸಿ ಕೊನೆಗೆ ತನ್ನ ತಮ್ಮ ಮುದ್ದುಪಾದಯ್ಯನ ಹೆಸರಿನಲ್ಲಿ ಸೌದೆ ಕತ್ತಾವಣೆಯನ್ನು ಉಳಿಸಿಕೊಂಡು "ನಮ್ಮ ಹಣವನ್ನೆಲ್ಲ ಕೊಳ್ಳೆಹೊಡೆದನೆಂದು ಅನ್ಯಾಯಕ್ಕೆ ತುತ್ತಾದ 40 ಮಂದಿ ದಲಿತರು ದೂರಿದ್ದಾರೆ.

ಈ ಅನ್ಯಾಯವನ್ನು ಮನಗಂಡ ಅರಣ್ಯ ಅಧಿಕಾರಿಗಳು ಸೌದೆ ಕತ್ತಾವಣೆ ಅಧಿಕಾರವನ್ನು ಈಗ ದಲಿತರೆಲ್ಲರಿಗೂ ಹಂಚಿದ್ದಾರೆಂದು ಗೊತ್ತಾಗಿದೆ.

ಇಪ್ಪತ್ತು ವರ್ಷಗಳಿಂದ ಕಾಡನ್ನು ಕಡಿದು ಹಸನು ಮಾಡಿರುವ ಭೂಮಿಯನ್ನು ನಮಗೇ ನ್ಯಾಯಬದ್ಧವಾಗಿ ಹಂಚಿಕೊಟ್ಟು ನಮ್ಮ ಹೆಸರಿಗೆ ಖಾತೆ ಮಾಡಿಕೊಡಬೇಕೆಂದು ಅನ್ಯಾಯಕೊಳಗಾಗಿರುವ ದಲಿತರು ಅನೇಕ ತಿಂಗಳುಗಳಿಂದ ಸರ್ಕಾರದತ್ತ ಕಣ್ಣುಬಿಟ್ಟುಕೂತ್ತಿದ್ದಾರೆ.

ಈ ದಿಶೆಯಲ್ಲಿ ಬೆಂಗಳೂರು ಜಿಲ್ಲಾ ರೈತಸಂಘ ಇವರ ಪರ ನಡೆಸಿದ ಕೆಲವು ಹೋರಾಟಗಳು ಶ್ಲಾಘನೀಯ.

## ಚಿಕ್ಕಮಗಳೂರು ತಾಲ್ಲೂಕು ದಲಿತರಿಂದ ಭೂಆಕ್ರಮಣ

ವರದಿ : ಸಣ್ಣಯ್ಯ

ಚಿಕ್ಕಮಗಳೂರು ಜಿಲ್ಲೆ ಚಂಡಗೋಡು ಗ್ರಾಮದ ದಲಿತರು ಸುಮಾರು 50ಲಕ್ಷರೂಗೂ ಹೆಚ್ಚು ಬೆಲೆಬಾಳು ಭೂಮಿಯನ್ನು ದಲಿತ ಸಂಘರ್ಷ ಸಮಿತಿಯ ದಿಟ್ಟ ಹೋರಾಟದಿಂದ ಗಳಿಸಿಕೊಂಡ ಕೆಲವೇ ದಿನಗಳಲ್ಲಿ ಇದೇ ತಾಲ್ಲೂಕಿನ ಕೂದುವಳ್ಳಿಯ ಭೂಹೀನ ದಲಿತರು ತಮ್ಮ ಗ್ರಾಮದ ವ್ಯಾಪ್ತಿಗೆ ಸೇರಿದ ಸುಮಾರು 75 ಎಕರೆ ಸರ್ಕಾರಿ ಭೂಮಿಯನ್ನು ಇತ್ತೀಚೆಗೆ ಆಕ್ರಮಿಸಿಕೊಂಡಿದ್ದಾರೆ.

ಸುಮಾರು 75 ಕುಟುಂಬಗಳಿರುವ ಕೂದುವಳ್ಳಿ ದಲಿತರಲ್ಲಿ ಬಹುತೇಕ ಭೂಹೀನರು. ಮೇಲ್ಕಂಡ ಸರ್ಕಾರಿ ಭೂಮಿ ಸರ್ವೆ ನಂ. 82ಕ್ಕೆ ಕಳೆದ ಎರಡು ವರ್ಷಗಳಿಂದಲೂ ಇವರು ಸರ್ಕಾರಕ್ಕೆ ಅರ್ಜಿಸಲ್ಲಿಸುತ್ತಲೇ ಅಧಿಕಾರಿಗಳಿಗೆ ಕೈಮುಗಿದು ನಿರಾಶರಾಗುತ್ತಿದ್ದರು. ದಲಿತ ವಿರೋಧಿ ಮನೋಭಾವದ ಅಧಿಕಾರಿಗಳು ಎಂದೂ ಇವರ ಮನವಿಯತ್ತ ಕಿವಿಗೊಡಲಿಲ್ಲ.

ಚಂಡಗೋಡು ಯಶಸ್ವೀ ಹೋರಾಟದ ಬಗ್ಗೆ ತಿಳಿದ ಈ ದಲಿತರು ತಮ್ಮ ಹೋಬಳಿ ಮಟ್ಟದಲ್ಲಿ ದಲಿತ ಸಂಘರ್ಷ ಸಮಿತಿ ಶಾಖೆಯನ್ನು ರಚಿಸಿಕೊಂಡು ಭೂ ಆಕ್ರಮಣವೇ ಉಳಿದಿರುವ ಮಾರ್ಗವೆಂದು ತೀರ್ಮಾನಿಸಿದರು.

ಭೂಹೀನ ಐವತ್ತು ಮಂದಿ ದಲಿತರು ನವೆಂಬರ್ 7 ರಂದು ಚಿಕ್ಕಮಗಳೂರು ತಹಸಿಲ್ದಾರ್‌ಗೆ ಮತ್ತೊಮ್ಮೆ ಅರ್ಜಿಸಲ್ಲಿಸಿ ಮರುದಿನವೇ ಸರ್ಕಾರದ ಆ 75 ಎಕರೆ ಭೂಮಿಯನ್ನು ಆಕ್ರಮಿಸಿಕೊಂಡರು. ಈಗ ಭೂಮಿಯನ್ನು ಸಮಮಟ್ಟ ಮಾಡಿಕೊಂಡು ಸಾಗುವಳಿಯಲ್ಲಿ ತೊಡಗಿದ್ದಾರೆ.

ದಲಿತರ ಸಂಘಟಿತ ಹೋರಾಟಕ್ಕೆ ಹೆದರಿದ ಅಧಿಕಾರಿಗಳು ಈ ಕೂಡಲೇ ಜಮೀನು ಮಂಜೂರು ಮಾಡಿಕೊಡುವುದಾಗಿ ಭರವಸೆ ನೀಡಿ ಮಂಜೂರಾತಿ ಕೆಲಸದಲ್ಲಿ ತೊಡಗಿದ್ದಾರೆ.

# ಸರ್ಕಾರಕ್ಕೆ ಆದಾಯ ಕೊಡುವ ಮದ್ಯಪಾ

ಇಂದು ಮದ್ಯಪಾನವನ್ನು ಸಾಮಾನ್ಯವಾಗಿ ಒಂದು ನೈತಿಕ ಮೌಲ್ಯಗಳ ಸಮಸ್ಯೆಯೆಂದು ಪರಿಗಣಿಸಲಾಗುತ್ತಿದೆ. ಆದರೆ ಈ ಮೌಲ್ಯದ ತಳಹದಿಯಾಗಿ ಸಾಮಾಜಿಕ ಆರ್ಥಿಕ ವ್ಯವಸ್ಥೆ ಇದೆ. ಇಂದಿನ ಮದ್ಯಪಾನದ ಸಮಸ್ಯೆಯನ್ನು ಅರ್ಥ ಮಾಡಿಕೊಳ್ಳಲು ಚಾರಿತ್ರಿಕವಾಗಿ ಕುಡಿತದ ಬೆಳವಣಿಗೆಯನ್ನು ತಿಳಿಯುವುದು ಅವಶ್ಯ.

ಪ್ರಾಚೀನ ಭಾರತದಲ್ಲಿ ಮದ್ಯಪಾನ ಅಂಗೀಕೃತ ಮೌಲ್ಯವಾಗಿತ್ತು. ಇದನ್ನು ಮೊದಲನೇ ಬಾರಿಗೆ ಋಗ್ವೇದದಲ್ಲಿ ಗುರುತಿಸಬಹುದು. ಋಗ್ವೇದದ 9ನೇ ಪರಿಚ್ಛೇದದಲ್ಲಿ "ಸೋಮ" ರಸವೆಂಬ ಪಾನೀಯದ ಬಗ್ಗೆ 114 ಶ್ಲೋಕಗಳಿವೆ. ಆ ಶ್ಲೋಕಗಳಲ್ಲಿ "ಸೋಮರಸ"ವನ್ನು ದೇವರ ರೂಪದಲ್ಲಿ ಗುರುತಿಸಿ ಅದನ್ನು ಇಂದ್ರ ಮತ್ತು ಚಂದ್ರರಿಗೆ ಹೋಲಿಸಲಾಗಿದೆ ಮತ್ತು ದೇವತೆಗಳ ಪಾನೀಯವೆಂದು ಹೇಳಲಾಗಿದೆ. ಆ ಶ್ಲೋಕಗಳಲ್ಲಿ "ಸೋಮರಸ"ವನ್ನು ಕುಡಿಯುವವರ ದೇಹ ಬಲಗೊಳ್ಳುತ್ತದೆ. ಅವರ ಹೃದಯದಲ್ಲಿ ಧೈರ್ಯ, ಸಂತೋಷ ಉಂಟಾಗುತ್ತದೆ. ಅವರ ಮನಸ್ಸು ಪ್ರಫುಲ್ಲಗೊಳ್ಳುತ್ತದೆ ಮತ್ತು ಅವರು ಅಮರರಾಗುತ್ತಾರೆ ಎಂದು ವರ್ಣಿಸಲಾಗಿದೆ. ಸೋಮರಸವು 'Sacrostemma Viminale' ಎಂಬ ಸಸ್ಯದ ರಸವೆಂದು ನಂಬಲಾಗಿದೆ. ಅದು ಇಂದ್ರನ ಪಾನೀಯವೆಂದು ನಂಬಿಕೆಯಿದ್ದುದರಿಂದ ಭಕ್ತರು ಯಜ್ಞ ಯಾಗಾದಿಗಳನ್ನು ಮಾಡುವಾಗ ಅದನ್ನು ಅರ್ಪಿಸಿ, ಕುಡಿಯುತ್ತಿದ್ದರು. ಆದರೆ 'ಸೋಮರಸ'ವನ್ನು ಮಾದಕ ಪಾನೀಯವೆಂದು ಪರಿಗಣಿಸಿದ್ದರ ಬಗ್ಗೆ ಯಾವುದೇ ದಾಖಲೆಯಿಲ್ಲ. ಆದರೆ ಮಾದಕ ಪಾನೀಯವೆಂದು ಪರಿಗಣಿಸಲ್ಪಟ್ಟಿದ್ದ 'ಸುರ' ಪಾನ ಆಗ ಜಾರಿಯಲ್ಲಿತ್ತು. ಅಥರ್ವಣ ವೇದದಲ್ಲಿ ಈ ಬಗ್ಗೆ ಬಹಳ ವಿವರಗಳಿವೆ.

ಕ್ರಿಸ್ತಪೂರ್ವ 4ನೇ ಶತಮಾನದಲ್ಲಿ ಕೌಟಿಲ್ಯನು ಬರೆದ 'ಅರ್ಥಶಾಸ್ತ್ರ'ದಲ್ಲಿ ಮದ್ಯದ ವ್ಯವಹಾರದ ಬಗ್ಗೆ ಇದ್ದ ತಡೆಗಳನ್ನು ವಿವರಿಸಿದ್ದಾನೆ. ಅವನು ಮದ್ಯದಿಂದಾಗಿ ಸೈನಿಕ ಶಿಬಿರಗಳಲ್ಲಿ ಶಿಸ್ತುಕುಂದುವುದೆಂಬ ಕಾರಣದಿಂದ ಮದ್ಯಪಾನವನ್ನು ನಿಷೇದಿಸಿದ್ದನ್ನು ತಿಳಿಸುತ್ತಾನೆ. ಶಂಕರಚಾರ್ಯರು ತಮ್ಮ ಪುಸ್ತಕ "ನೀತಿಸಾರ"ದಲ್ಲಿ ಮದ್ಯದಂಗಡಿಗಳ ಜನನಿಬಿಡ ಪ್ರದೇಶಗಳಿಂದ ದೂರವಿರಬೇಕೆಂದು ಹೇಳಿದ್ದಾರೆ. ಹೀಗಾಗಿ ಮದ್ಯಪಾನ ಕಮ್ಮಿಯಾಗಬಹುದೆಂದು ಅವರ ಲೆಕ್ಕಾಚಾರ. ಆಗಿನ ಸಮಾಜದಲ್ಲಿ ಮದ್ಯಪಾನ ಒಂದು ಸಾಮಾನ್ಯ ಆಚರಣೆಯಾಗಿತ್ತು. ಅದರ ಮೇಲಿನ ಕೇವಲ ನೈತಿಕ ಮಟ್ಟದ್ದಾಗಿತ್ತು.

ಬುದ್ಧ ಧರ್ಮದ ಕಾಲದಲ್ಲಿ Sobrietyಯನ್ನು ಬೆಳೆಸಲು ಮಾಡಿದ ಪ್ರಯತ್ನಗಳಿಂದಾಗಿ ಮದ್ಯಪಾನ ಒಂದು ಧಾರ್ಮಿಕ ನಿಷಿದ್ಧ (taboo) ವಾಗಿತ್ತು. ಸಾರ್ವಭೌಮ ಅಶೋಕನ ಎಡಬಿಡದ ಪ್ರಯತ್ನಗಳಿಂದಾಗಿ ಮಾದಕ ಪಾನೀಯಗಳ ವರ್ಜ್ಯ ಒಂದು ತೀವ್ರ ಮಟ್ಟವನ್ನು ಮುಟ್ಟಿತ್ತು. ಆ ಕಾಲದಲ್ಲಿ ಭಾರತಕ್ಕೆ ಭೇಟಿಕೊಟ್ಟ ಮೆಗಾನೀಸ್ತ್ ಈ ವಿಷಯನ್ನು ಗುರುತಿಸಿದ್ದಾನೆ. ಬುದ್ಧಧರ್ಮವನ್ನು ವಿರೋಧಿಸಲು ಪುನರುಜ್ಜೀವನಗೊಂಡ ಬ್ರಾಹ್ಮಣವಾದ ಮದ್ಯಪಾನದ ನಿಷಿದ್ಧವನ್ನು ಎತ್ತಿಹಿಡಿಯಿತು.

ಮುಸ್ಲಿಮರ ಆಳ್ವಿಕೆಯಲ್ಲಿ ಇಸ್ಲಾಂ ಧರ್ಮದ ಮದ್ಯಪಾನ ವಿರೋಧಿ ಪ್ರತಿಬಂಧ ಜಾರಿಯಲ್ಲಿತ್ತು. ಆಗ ಮದ್ಯದ ಮೇಲಿನ ತೆರಿಗೆಯಿಂದ ದೊಡ್ಡ ಮೊತ್ತದ ಕಂದಾಯವನ್ನು ಸಂಗ್ರಹಿಸಲು ಸಾಧ್ಯವಿದ್ದರೂ ಸಹ ಆಗಿನ ದೊರೆಗಳು ಅಂತ
ಪ್ರಯತ್ನ ಮಾಡಲಿಲ್ಲ.

ಮೇಲೆ ಗುರುತಿಸಿದ ಮದ್ಯಪಾನದ ದೃಷ್ಟಿ
ಚಾರಿತ್ರಿಕ ಘಟ್ಟಗಳಲ್ಲಿ ಕಂಡುಬರುವ ಬಹುಮು
ಅಂಶವೇನೆಂದರೆ, ಆ ವ್ಯವಸ್ಥೆಗಳಲ್ಲಿ ಎಲ್ಲಿಯ
ಸಹ ಯಾವ ಆಳುವ ವರ್ಗವೂ ಸಹ ಮದ್ಯಪಾ
ಆದಾಯದ ಮೂಲವೆಂದು ಪರಿಗಣಿಸಲಿ
ಆದರೆ ಬ್ರಿಟಿಷ್ ವಸಾಹತುಶಾಹಿಯ ಪ್ರವೇ
ದಿಂದ ಪರಿಸ್ಥಿತಿ ತಲೆ ಕೆಳಗಾಯಿತು.

ಭಾರತದ ಸಂಪತ್ತನ್ನು ಹೀರತೊಡಗಿದ ಬ್ರಿಟಿ
ರಿಗೆ ಮದ್ಯದ ಮೇಲಿನ ಕಂದಾಯದ ಮು

ಡಾ|| ವಿ. ಲಕ್ಷ್ಮೀನಾರಾಯಣ

ವಾಗಿ ಕಂಡಿತು. ಭಾರತದ ಚರಿತ್ರೆಯಲ್ಲಿ ಮೊ
ಮೊದಲು ಈಸ್ಟ್ ಇಂಡಿಯಾ ಕಂಪೆನಿ 19
ರಲ್ಲಿ ಮದ್ಯದ ಮೇಲೆ ತೆರಿಗೆ ಹಾಕಲು ಪ್ರಾರ
ಸಿತು. ಅದು ಮದ್ಯದ ಮಾರಾಟದ ಹಕ್ಕ
ಅತಿ ಹೆಚ್ಚಿನ ಬಿಡ್‌ಮಾಡುವ ಕಂಟ್ರಾಕ್ಟ್‌ದಾ
ನಿಗೆ ಕೊಡಲು ಪ್ರಾರಂಭಿಸಿತು, ಅದಕ್ಕಾ

# ರಾಷ್ಟ್ರ ಸಮಾಜವಾದದ ಬಗೆಗೆ ಡಾ

4

[ಕಳೆದ ಸಂಚಿಕೆಯಿಂದ]

**ರಾಷ್ಟ್ರ ಸಮಾಜವಾದ :**

ಡಾ. ಅಂಬೇಡ್ಕರ್ ಅವರು ರಾಜಕೀಯ ಪ್ರಜಾಪ್ರಭುತ್ವದಲ್ಲಿ ಇರಬಹುದಾದ ನ್ಯೂನ್ಯತೆಯ ಕಡೆಗೆ ತಮ್ಮ ದೃಷ್ಟಿ ಹರಿಸಿರುವರು.

ಆರ್ಥಿಕ ರಂಗದಲ್ಲಿ ಬಂಡವಾಳಶಾಹಿಗಳ, ಭೂಮಾ
ಲೀಕರ ಹಿಡಿತವಿರುವುದನ್ನು ತಪ್ಪಿಸದಿರುವು
ಇದರ ಮುಖ್ಯ ತೊಡಕಾಗಿದೆ. ಅದನ್ನೇ ಬೇ
ತರಹ ಹೇಳುವುದಾದರೆ, ಸಂವಿಧಾನಾತ್ಮಕ ಪ್ರ
ಪ್ರಭುತ್ವ ವ್ಯವಸ್ಥೆಯನ್ನು ನಾಶಮಾಡುವುದೆಂ
ವೈಕ್ತಿಗತ ಒಡೆತನಕ್ಕೆ ಅವಕಾಶ ಮಾಡಿಕೊ
ವುದೇ ಎಂದು ಅರ್ಥವಾಗುವುದು. ಅದರಿ
ಆರ್ಥಿಕ ದ್ವಂದ್ವವನ್ನು ಸಂಪೂರ್ಣವಾಗಿ ತೊಡೆ
ಹಾಕಲು ಕೆಳಗಿನ ಆರ್ಥಿಕ ಯೋಜನೆಯ
ಪಾಲಿಸಬೇಕು.

1. ಕೈಗಾರಿಕೆಗಳನ್ನು ರಾಷ್ಟ್ರೀಕರಣ ಮಾ
ಬೇಕು.

# ನಿಯಂತ್ರಣ - ಒಂದು ಅನಿಸಿಕೆ

ntral distillery system ನ್ನು
ರಂಭಿಸಿತು. ಹೀಗಾಗಿ ಮದ್ಯದ ಮಾರಾಟ
ದು ವ್ಯವಸ್ಥೆಯಾಯಿತು. 1874ರ ಹೊತ್ತಿಗೆ
ಲವಾಗಿ ಹರಡಿದ ಮದ್ಯಪಾನದ ಚಟಗಳು
ಹೆಚ್ಚಿನ ಪ್ರಮಾಣದಲ್ಲಿ ಕಂಡುಬಂದಿತ..
ನ್ನು ಪ್ರತಿಭಟಿಸಿ ಬಂಗಾಳದ ಶ್ರೀ ಕೇಶವ್
ದ್ರ ಸೇನ್‌ರು ಆಗಿನ ವೈಸ್‌ರಾಯ್‌ಗೆ ಮನವಿ
ಸಿದರು. ಅದರ ಪ್ರಕಾರ ಹೆಚ್ಚಿನ ಪ್ರಮಾ
ಮದ್ಯ ಸೇವನೆ ಕಾರಣಗಳು ಎರಡು, ಒಂದು;
ಗ್ಲೀಷ್ ವಿದ್ಯಾಭ್ಯಾಸದಿಂದಾಗಿ ಸಾಂಪ್ರದಾ
ಕ ನಂಬಿಕೆ. ಮೌಲ್ಯಗಳ ಸ್ಥಾನಪಲ್ಲಟ.
ಡು; ಅನವಶ್ಯಕವಾಗಿ ಮದ್ಯದಂಗಡಿಗಳ
ಚ್ಚಳ. 'ಬ್ರಿಟಿಷ್ ಸರ್ಕಾರ ತಮ್ಮೊಡನೆ
ಕ್ಸ್‌ಪಿಯರ್ ಮತ್ತು ಮಿಲ್ಟನ್‌ನಷ್ಟೇ ಅಲ್ಲ,
ಂದಿಬಾಟಲ್‌ಗಳನ್ನೂ ತಂದಿತು' ಎಂದು
ರರು ದೂರಿದರು. ಆಗ ಬ್ರಿಟಿಷ್ ಸರ್ಕಾರ
ಮಿಸಿದ್ದ ಒಂದು ಆಯೋಗದ ಪ್ರಕಾರ,
ಚ್ಚಿನ ಪ್ರಮಾಣದ ಮದ್ಯ ಸೇವನೆಗೆ ಕಾರಣ,
ಂದಲಿನ ಕಾಲದಲ್ಲಿದ್ದ ಕುಡಿತದ ಪ್ರತಿಬಂಧ
ು ಸಾಮಾಜಿಕ, ಧಾರ್ಮಿಕ ಬದಲಾವಣೆಗ
ದ ಸಡಿಲಗೊಂಡಿದ್ದೇ ಮೂಲ ಕಾರಣವೆಂದು
ಳಿತು. ಮದ್ಯಪಾನದ ವಿರುದ್ಧ ಕಾಂಗ್ರೆಸ್

ಪಕ್ಷ ತನ್ನ 1888ರ, 89ರ, 1900ರ ಸಮ್ಮೇಳನಗಳಲ್ಲಿ ನಿರ್ಣಯ ಕೈಗೊಂಡಿತು. ಈ ಒತ್ತಾಯಕ್ಕೆ ಮಣಿದು ಬ್ರಿಟಿಷ್ ಸಾಮ್ರಾಜ್ಯಶಾಹಿ 1905ರಲ್ಲಿ 'ಗರಿಷ್ಠ ಕಂದಾಯ ಮತ್ತು ಮದ್ಯದ ಕನಿಷ್ಠ ಬಳಕೆ' ಎಂಬ ನೀತಿಯನ್ನು ಹೊರಡಿಸಿದರು. ಆದರೆ ಆಚರಣೆಯಲ್ಲಿ 'ಕನಿಷ್ಠ ಪ್ರಮಾಣದ ಬಳಕೆ' ಎಂದೂ ಸಹ ಜಾರಿಗೆ ಬರಲಿಲ್ಲ. ಮೇಲೆ ಗಮನಿಸಿದ ಎಲ್ಲಾ ಅಂಶಗಳ ಅರ್ಥ ಭಾರತವನ್ನು ಪ್ರವೇಶಿಸಿದ ಬ್ರಿಟಿಷ್ ಬಂಡವಾಳ ಈ ದೇಶದಲ್ಲಿನ ಮದ್ಯಪಾನದ ಪ್ರಮಾಣದಲ್ಲಿ ಕ್ರಾಂತಿಕಾರಿ ಬದಲಾವಣೆಗಳನ್ನು ತಂದಿತು ಮತ್ತು ತನ್ನ ಲೂಟಿಯಲ್ಲಿ ಅಬ್ಕಾರಿಯನ್ನು ಒಂದು ಮುಖ್ಯ ಭಾಗವನ್ನಾಗಿಸಿತು. 1947ರ ಅಧಿಕಾರ ವರ್ಗಾವಣೆಯ ನಂತರವೂ ಸಹ ಈ ದೇಶದ ದಳ್ಳಾಳಿ ಬೂರ್ಜ್ವಾವರ್ಗ ಒಂದಡೆ ಗಾಂಧೀ ನಾಮ ಜಪಿಸುತ್ತಾ, ಇನ್ನೊಂದು ಕಡೆ ಮದ್ಯಪಾನದ ಹೆಚ್ಚಳವನ್ನು ನಡೆಸುತ್ತಲೇ ಇದೆ. ಈ ಬಗ್ಗೆ ಕೆಲವು ಅಂಕಿ ಅಂಶಗಳನ್ನು ಗಮನಿಸಬೇಕು.

| ವರ್ಷ | ಇರುವ ಸಾಮರ್ಥ್ಯ | ಉತ್ಪಾದನೆ |
|---|---|---|
| 1970 | 38.0 | 31.1 |
| 71 | 38.0 | 29.4 |
| 72 | 44.3 | 35.2 |
| 73 | 56.8 | 45.2 |

ಮೂಲ- statistical abstract-1974

ಮೇಲಿನ ಪಟ್ಟಿಯಿಂದ ವರ್ಷದಿಂದ ವರ್ಷಕ್ಕೆ ಹೆಚ್ಚುತ್ತಿರುವ ಮದ್ಯದ ಎಲ್ಲಾ ಸರ್ಕಾರಗಳೂ ಸಹ ಅಬ್ಕಾರಿಯನ್ನು ಆದಾಯದ ಮುಖ್ಯ ಮೂಲವನ್ನಾಗಿಸಿವೆ. ಅವೆಲ್ಲವೂ ಸಹ ಮುಂದಿಡುವ ವಾದ ಒಂದೇ ರೀತಿಯದ್ದು ಅದೇನೆಂದರೆ ಪಾನನಿರೋಧವನ್ನು ಸಂಪೂರ್ಣವಾಗಿ ಜಾರಿತಂದರೆ ಆದಾಯವೇ ಇರುವುದಿಲ್ಲವೆಂದು ಹೇಳುತ್ತವೆ. ಕರ್ನಾಟಕವನ್ನು ಉದಾಹರಣೆಗೆ ತೆಗೆದುಕೊಂಡರೆ, ವರ್ಷದಿಂದ ವರ್ಷಕ್ಕೆ ಆದಾಯ ಜಾಸ್ತಿಯಾಗುತ್ತಿರುವುದು ಕಂಡುಬರುತ್ತದೆ.

ಮದ್ಯಪಾನವನ್ನು ಬೆಳೆಸುವ ಮತ್ತು ಸಂಯಮದ ಹಿಂದೆ ಇರುವ ಆಳುವ ವರ್ಗದ ರಾಜಕೀಯವನ್ನು ಗುರುತಿಸುವ ಮೊದಲು ಈ ದೇಶದಲ್ಲಿ ಮದ್ಯಯಾರಿಗಾಗಿ ಯಾವರೀತಿ ಉತ್ಪಾದನೆಯಾಗುತ್ತಿದೆ ಎಂಬುದನ್ನು ತಿಳಿಯೋಣ.

[ಕಡೆಯ ಪುಟ ನೋಡಿ]

# ಬಿ. ಆರ್. ಅಂಬೇಡ್ಕರ್ ವಿಶ್ಲೇಷಣೆ

ವ್ಯವಸಾಯ ರಾಷ್ಟ್ರೀಕೃತವಾಗಬೇಕು,
ಾಮೂಹಿಕ ಬೇಸಾಯ ಪದ್ಧತಿಯನ್ನು ಅಳವಡಿ
ಬೇಕು.

ಕೈಗಾರಿಕೆಗಳಿಗೆ,ಹೈನುಗಾರಿಕೆಗೆಹಣಸಹಾಯ
ಾಡುವಾಗ ಸರಿಯಾದ ರೀತಿಯ ರಾಷ್ಟ್ರೀಯ
ಬಂಧನೆ ಇರಬೇಕು.

ಮೂಲ : ಡಿ. ಎಚ್. ಶ್ರೀಕಾಂತ್
ಅನು : ದೇವಯ್ಯಹರವೆ

. ವಿಮೆಯನ್ನು ರಾಷ್ಟ್ರೀಕರಿಸಬೇಕು, ಇದು
ಕ್ತಿಗೆ ತುಂಬ ಭರವಸೆಯನ್ನು ಒದಗಿಸಿದಂತಾಗಿ
ುತ್ತದೆ.

5. ಖಾಸಗೀ ಉದ್ದಿಮೆಗಳಿಗೆ ಸಹಾಯ ಮಾಡಬೇಕು. (ಮುಖ್ಯವಾದ ಉತ್ಪಾದನ ಮೂಲಗಳೆಲ್ಲಾ ರಾಷ್ಟ್ರದ ಕೈಲಿ ಇರುವಾಗ ಒಂದು ಮಿತಿಯೊಳಗೆ ಈ ತರಹ ಸಹಾಯ ಮಾಡುವುದರಿಂದ ಜನರ ಬದುಕಿನಲ್ಲಿ ಉತ್ತೇಜನ ನೀಡಿದಂತಾಗುವುದು).

ಮೇಲಿನ ಯೋಜನೆಗಳಿಂದ ಕೆಲವು ಮುಖ್ಯ ವಿಷಯಗಳನ್ನು ಗಮನಿಸಬೇಕು. ಈ ಯೋಜನೆಯನ್ನು ವಿಶಾಲವಾಗಿ ಗಮನಿಸಿದ್ದೇ ಆದರೆ ಇದು ಬಂಡವಾಳಶಾಹಿ ಪ್ರವೃತ್ತಿಯನ್ನೂ, ಬಂಡವಾಳಶಾಹಿ

[7ನೇ ಪುಟ ನೋಡಿ]

# ಹಡದೆಗಾರ

ಸಾವಿರ ಬಾರಿ ಅಲ್ಲಗಳೆಯ ಬಹುದು
ಅಲ್ಲಗಳೆಯಿರಿ
ನಿಮ್ಮ ಪೈಕಿ ಅದೆಷ್ಟೋ ಮನಸುಗಳ ಕುಸುರುಗಳಲ್ಲಿ
ಇನ್ನೂ ತುಂಬಿಕೊಂಡಿದ್ದಾನೆ
ಅಂಗುಲಿನಪ್ಪಾದರೂ 'ಪುರಿಯ ಶಂಕರಾಚಾರ್ಯ'
ಉಕ್ಕಿ ಬರುತ್ತಾನೆ ಅವನು ಆಗೀಗ ಮೇಲೆ
ದ್ವೇಷದ ಬೆಂಕಿಯಿಂದ
'ದೀವಳಿಗೆಯ ಹಾವಿನಂತೆ' ವ್ಯಕ್ತನಾಗುತ್ತಾನೆ ವಿರಾಟ ರೂಪದಿಂದ
ಎಳೆ ಮಕ್ಕಳು ಹಚ್ಚಿದ ಉರಿವ ಕಡ್ಡಿಯಿಂದ
ಸಾವಿರಬಾರಿ ಅಲ್ಲಗಳೆಯ ಬಹುದು
ಅಲ್ಲಗಳೆಯಿರಿ
ನಮಗದರ ಕಿಂಚಿತ್ತೂ ಚಿಂತೆಯಿಲ್ಲ
ಏಳುವುದಿಲ್ಲ ಈಗ ಹೊತ್ತಿಕೊಂಡ ಹಸಿದ ಆತ್ಮ
ಅದೂ ಕೂಡ ಈಗ ಸಾಕಷ್ಟು ಅರಿತುಕೊಂಡಿದೆ
ಬೆತ್ತಲೆ ಮನಸ್ಸು ನಿಮ್ಮಲ್ಲಿ ಇಲ್ಲವೇ ಇಲ್ಲ.

ಸಾವಿರ ಬಾರಿ ಅಲ್ಲಗಳೆಯ ಬಹುದು
ಅಲ್ಲಗಳೆಯಿರಿ
ಏನನ್ನೂ ಹೇಳಬೇಕಾಗಿಲ್ಲ ನಾವು
ನಮ್ಮ ವ್ಯಥೆಯ ಯೂಥ
ಬರುತ್ತಿದೆ ಖಿಡಕು ನೆಲ ದಾಟಿ-ಬಯಲು ಸೀಮೆಗೆ
ತುಟಿಯಲ್ಲಿ ತುಂಬಿಕೊಂಡು ನಕಾರ
ಆದರ ಕಣ್ಣಲ್ಲಿದೆ ಅಂಗಾರ
ಬರುವುದಿದೆ, ಬರುತ್ತಿದೆ
ನಮ್ಮ ವ್ಯಥೆಯ ಯೂಥ ಬಯಲು ಸೀಮೆಗೆ
ಹೊಡೆಯಲಿದೆ ಹೊಡೆಯಲಿದೆ
ಡಿಕ್ಕಿ-ಸಂಸ್ಕೃತಿಯ ಈ ಹಳೆ ಬುರುಜಿಗೆ
ಬೀಳಲಿಕ್ಕಿಲ್ಲ ಬಹುಶ ಕಿಂಡಿ
ಆದೀತು ರಕ್ತ ಬಂಬಳ, ಉಳಿದೀತು ಬರೀ ವೇದನೆ ಪಾಲಿಗೆ
ಸಜ್ಜನರೆ, ಚಿಂತೆಯಿಲ್ಲ ನಮಗದರ
ಬದುಕ ಬಲ್ಲೆವು ಹೊತ್ತು ಆ ವೇದನೆಯ ಭಾರ
ಕಾರಣ, ನಾವು ಯುಗಯುಗಾಂತರದ ದುಃಖದ ಹಡದೆಗಾರರು

ಮರಾಠಿಮೂಲ : ಅರ್ಜುನಡಾಂಗಳೆ          ಅನು: ಭಾಲಚಂದ್ರ ಜಯಶೆಟ್ಟಿ

## ಮೂಡಿಗೆರೆ : ಪೋಲೀಸರಿಂದ ದಲಿತ ಕಾರ್ಮಿಕನ ಕೊಲೆ

[ಒಂದನೇ ಪುಟದಿಂದ]

ರಕ್ಷಿಸುವಂತೆ ಒತ್ತಾಯಿಸಲು ಸ್ಥಳೀಯ ದಲಿತ ಸಂಘರ್ಷ ಸಮಿತಿ ಕಾರ್ಯಕರ್ತರು ಸಹಸ್ರಾರು ಸಂಖ್ಯೆಯಲ್ಲಿ ತಾಲ್ಲೂಕಿನ ಕಾರ್ಮಿಕರನ್ನು ಸಂಘಟಿಸಿ ಶವ ಪರೀಕ್ಷೆನಂತರ ಮರುದಿನ ಅದನ್ನು ಹೊತ್ತು ಮೂಡಿಗೆರೆಯ ಪ್ರಮುಖ ಬೀದಿಗಳಲ್ಲಿ ಮೆರವಣಿಗೆ ನಡೆಸಿ "ಪೋಲೀಸ್ ದೌರ್ಜನ್ಯಕ್ಕೆ ಧಿಕ್ಕಾರ", "ಭೂಮಾಲೀಕರ ಹಿತಕಾಯುವ ಕೊಲೆಗಡುಕ ಪೋಲೀಸರಿಗೆ ಶಿಕ್ಷೆಯಾಗಲಿ" "ಎಸ್ಟೇಟ್ ಮಾಲೀಕ ಶ್ರೀಕಂಠಗೌಡನಿಗೆ ಧಿಕ್ಕಾರ" ಎಂಬ ಘೋಷಣೆ ಹಾಕಿ ಪ್ರತಿಭಟಿಸಿದರು.

ಶವಹೊತ್ತು ಮೆರವಣಿಗೆಕಾರರು ನಂತರ ಪೋಲೀಸ್ ಠಾಣೆ ಎದುರು ಶವವಿಟ್ಟು ಕೊಲೆಗಡುಕ ಪೋಲೀಸರನ್ನು ಶಿಕ್ಷಿಸಲು ಒತ್ತಾಯಿಸಿ ಧರಣಿ ನಡೆಸಿದರು.

### ಲಾಠಿ ಪ್ರಹಾರ :

ವಿಷಯ ತಿಳಿದ ಎಸ್. ಪಿ, ಡೀಸಿ ಮೂಡಿಗೆರೆಗೆ ಧಾವಿಸಿದರು. ಅವರು ಒಂದಾಗ ಪರಿಸ್ಥಿತಿ ಮತ್ತಷ್ಟು ಉದ್ರೇಕಕ್ಕೆ ಹೋಯಿತು. ಅಪರಾಧಿಗಳ ವಿರುದ್ದ ಸೂಕ್ತ ಕ್ರಮಕೈಗೊಳ್ಳುವುದಾಗಿ ಪ್ರತಿಭಟನಕಾರರನ್ನು ಸುಮ್ಮನಿರಿಸಲು ಯತ್ನಿಸಿ ವಿಫಲಗೊಂಡರು. ಈ ಹಂತದಲ್ಲಿ ಪೋಲೀಸರು ತಮ್ಮ ದೌರ್ಜನ್ಯವನ್ನು ಮತ್ತೆ ಮುಂದುವರಿಸಿ ಪ್ರದರ್ಶನಕಾರರ ಮೇಲೆ ಲಾಠಿ ಪ್ರಹಾರ ಮಾಡಿದರು. ಕೊಲೆಗಡುಕ ಪೋಲೀಸರನ್ನು ಈ ಕೂಡಲೇ ಸಸ್ಪೆಂಡ್ ಮಾಡಿ ತನಿಖೆ ನಡೆಸುವುದಾಗಿ ಎಸ್. ಪಿ, ಡೀಸಿ ಜನರಿಗೆ ಮತ್ತೆ ಮನವಿ ಮಾಡಿಕೊಂಡರು.

ಪೋಲೀಸರು ಶವವನ್ನು ತಮ್ಮ ವಶಕ್ಕೆ ತೆಗೆದುಕೊಂಡು ಪೋಲೀಸ್ ವ್ಯಾನಿನಲ್ಲಿ ಎಸ್ಟೇಟ್‌ಗೆ ಕೊಂಡೊಯ್ದರು.

ಶಂಭುವಿನ ಕೊಲೆಗೆ ಕಾರಣರಾದ ಶ್ರೀಕಂಠಗೌಡ ಮತ್ತು ಪೋಲೀಸರ ವಿರುದ್ಧ ಸೂಕ್ತಕ್ರಮ ತೆಗೆದುಕೊಳ್ಳಬೇಕೆಂದು ದ. ಸಂ. ಸ. ಚಿಕ್ಕಮಗಳೂರು ಶಾಖೆ ಒತ್ತಾಯಪಡಿಸಿದೆ.

# ರಾಷ್ಟ್ರ ಸಮಾಜವಾದದ ಬಗೆಗೆ ಡಾ|| ಬಿ. ಆರ್. ಅಂಬೇಡ್ಕರ್ ವಿಶ್ಲೇಷಣೆ

[ಮಧ್ಯದ ಪುಟದಿಂದ]

ಗಳು ಕಾರ್ಖಾನೆಗಳನ್ನೂ ಮತ್ತು ಜಮೀನುದಾರರು ಜಮೀನುದಾರಿಕೆಯನ್ನು- ಬೆಳೆಸುವುದಕ್ಕೂ ಸಂಪೂರ್ಣವಾಗಿ ವಿರೋಧವಾಗಿರುವುದು ತಿಳಿಯುತ್ತದೆ. ಈ ಯೋಜನೆಯ ಪ್ರಕಾರವಾಗಿ ಬಂಡವಾಳಶಾಹಿ ಅಥವಾ ಕಾರ್ಮಿಕನಾಗಲಿ, ಭೂಮಾಲೀಕ ಅಥವಾ ಕೃಷಿಕಾರ್ಮಿಕನಾಗಲಿ ಇರುವುದಿಲ್ಲ. ಅದರಿಂದ 'ರಾಷ್ಟ್ರ ಸಮಾಜವಾದ' ನಿರ್ಮಿಸುವ ಆರ್ಥಿಕ ವೇದಿಕೆಯಲ್ಲಿ ಶೋಷಿತ ಜನಾಂಗ ಅದರಲ್ಲೂ ದಲಿತ ಜನಾಂಗ ಆರ್ಥಿಕ ಶೋಷಣೆಯಿಂದ ಮುಕ್ತವಾಗುವುದರಿಂದ ಅವರು ಗೌರವಾತ್ಮಕವಾಗಿ ಬಾಳುವುದಕ್ಕೆ ಅವಕಾಶವಿರುವುದು. ಯಾಕೆಂದರೆ ಇಂಥ ಸಮಾಜದಲ್ಲಿ ಅವರು ತಮ್ಮ ಜೀವನೋಪಾಯಕ್ಕೆ ಯಾವನೇ ಸವರ್ಣೀಯ ಭೂಮಾಲೀಕನನ್ನಾಗಲೀ, ಬಂಡವಾಳಶಾಹಿಯನ್ನಾಗಲಿ ಆಶ್ರಯಿಸಬೇಕಿಲ್ಲ. ಸಮಾಜದ ಎಲ್ಲಾ ವರ್ಗದ ಜನರ ಆರ್ಥಿಕ ಪ್ರತಿಷ್ಠೆಗಳು ಬದಲಾಗುತ್ತಿದ್ದಂತೆ, ಯಾವನೇ ಭೂಮಾಲೀಕ ದಲಿತನನ್ನು ಸಮಾಜದಿಂದ ಬಹಿಷ್ಕರಿಸುವಂಥ, ಊರಿಂದ ಓಡಿಸುವಂಥ ಕೆಲಸವನ್ನು ಮಾಡಲಾರ ಏನೇ ಆದರೂ ಇದು ಕಲ್ಪಿತ ವಿಷಯವೆಂದೇ ಭಾವಿಸಬೇಕು. ಆದುದರಿಂದ ಈಗಿರುವ ಆರ್ಥಿಕ ವ್ಯವಸ್ಥೆಯ ವೈರುಧ್ಯಗಳು ತೊಡೆದು ಹೋದಾಗ ಶ್ರಮಿಕವರ್ಗ ಗೌರವಾನ್ವಿತ ಬಾಳುವೆಯನ್ನು ಮಾಡಲು ಸಾಧ್ಯವಾಗುವುದು.

ಡಾ. ಅಂಬೇಡ್ಕರ್ ಅವರು ರಾಷ್ಟ್ರ ಸಮಾಜವಾದವನ್ನು ಸಮರ್ಥಿಸುತ್ತಾರೆ.. ಇದನ್ನು ಸಂವಿಧಾನದ ಮೂಲಭೂತವಾದ ಕಾನೂನನ್ನಾಗಿಸಬೇಕೆಂದು ಇವರು ಹೇಳುವರು. ಆಗ ಸಂವಿಧಾನಾತ್ಮಕವಾದ ಬಹುಮತದ ಬೆಂಬಲವಿಲ್ಲದಿದ್ದರೂ ಅಗತ್ಯವಾದ ಕಾನೂನುಗಳನ್ನು ತರುವುದಕ್ಕೂ ಅಥವಾ ರಾಷ್ಟ್ರ ಸಮಾಜವಾದದ ನಿಯಮಕ್ಕೆ ತಕ್ಕಂತೆ ಬದಲಾವಣೆಯ ಅಂಶಗಳನ್ನು ಸೇರಿಸುವುದಕ್ಕೂ, ಬೇಡವಾದ ವಿಷಯಗಳನ್ನೂ ತೆಗೆದುಹಾಕುವುದಕ್ಕೂ ಬಾಗಿಲು ಯಾವುದಕ್ಕೂ ತೆರೆದೇ ಇರುತ್ತದೆ. ಹೀಗೆ ರಾಷ್ಟ್ರ ಸಮಾಜವಾದದ ನೀತಿಯು ಇರುವಾಗ ಸಂವಿಧಾನಾತ್ಮಕ ಪ್ರಜಾಪ್ರಭುತ್ವವನ್ನು ಎರಡು ರಾಜಕೀಯ ಪಕ್ಷಗಳನ್ನು (ಒಂದು ಆಳುವ ಪಕ್ಷ ಮತ್ತೊಂದು ವಿರೋಧ ಪಕ್ಷ) ಕಡ್ಡಾಯವಾಗಿ ಇರುವಂತೆ ಮಾಡುವುದರ ಮುಖೇನ, ಕೆಲವೊಂದು ಮುಖ್ಯ ಬದಲಾವಣೆಗಳನ್ನೂ ತರಬಹುದು.

ಈ ರೀತಿಯ ಸ್ಥಿತಿಯು ಪ್ರತಿಯೊಬ್ಬನಿಗೂ ಸ್ವತಂತ್ರವಾಗಿ ಬಾಳಲು ಅವಕಾಶ ಕಲ್ಪಿಸುವುದು ಎಂಬ ಭರವಸೆಯು ಅಂಬೇಡ್ಕರ್ ಅವರಿಗೆ ಇರುವುದು. ಯಾಕೆಂದರೆ ರಾಷ್ಟ್ರ ಸಮಾಜವಾದದ ಯೋಜನೆಯ ಪ್ರಕಾರ ಯಾವುದೇ ಸರ್ಕಾರ ತನ್ನ ನಿರಂಕುಶವಾದ ಅಧಿಕಾರವನ್ನು ಯಾರ ಮೇಲಾಗಲಿ ಹೇರುವಂತಿಲ್ಲ. ಅದೇ ಸಮಯದಲ್ಲಿ ಸಾಮಾನ್ಯ ಜನತೆಯ ಮೇಲೆ ಶಕ್ತಿಶಾಲಿಗಳಾದ ವ್ಯಕ್ತಿಗಳು ಯಾವ ಆರ್ಥಿಕ ನಿರ್ಬಂಧತೆಯನ್ನು ವಿಧಿಸುತ್ತಿದ್ದರೋ ಅಂತಹುದನ್ನು ಕಸಿದುಕೊಳ್ಳುವುದರ ಮುಖೇನ ಇಂಥ ವ್ಯಕ್ತಿಗಳೂ ಸ್ವೇಚ್ಛೆಯಾಗಿ ವರ್ತಿಸುವುದನ್ನೂ ನಾಶಮಾಡುವುದು. ಅದಲ್ಲದೆ ರಾಷ್ಟ್ರ ಸಮಾಜವಾದದ ಮುಖ್ಯ ಅಂಶವೆಂದರೆ ಬಹಳ ಶಕ್ತಿಶಾಲಿಗಳಾದವರ ಹಕ್ಕುಗಳನ್ನೂ ಮಿತಿಗೊಳಿಸುವುದು. ಹಾಗೂ ಕಡಿಮೆ ಶಕ್ತಿಶಾಲಿಗಳ ಹಕ್ಕನ್ನು ಬಲಪಡಿಸುವುದು. ಆ ಮುಖೇನ ವ್ಯಕ್ತಿಯ ವೈಯಕ್ತಿಕ ಸ್ವಾತಂತ್ರ್ಯವನ್ನು ಇದು ಕಾಪಾಡುತ್ತದೆ.

ಡಾ. ಅಂಬೇಡ್ಕರ್ ಅವರ ಪ್ರಕಾರ ಉತ್ತಮ ರೀತಿಯ ರಾಜಕೀಯ ಪ್ರಜಾಪ್ರಭುತ್ವದ ಕಾರ್ಯ ನಿರ್ವಹಣೆಯು ನಾಲ್ಕು ಸ್ಥಿರ ಅಂಶಗಳನ್ನು ಅವಲಂಬಿಸಿರುವುದು.

1. ವ್ಯಕ್ತಿ ತನ್ನಷ್ಟಕ್ಕೆ ತಾನೇ ಸ್ವತಂತ್ರನಾಗಿರಬೇಕು.

2. ಕೆಲವೊಂದು ಸ್ಥಿರಾಸ್ತಿಗಳನ್ನು ಪರಭಾರೆ ಮಾಡಲಾಗದಂಥ ರೀತಿಯಲ್ಲಿ ಸಂವಿಧಾನದ ನಿಯತಿ ಇರಬೇಕು.

3. ಯಾವುದೇ ವ್ಯಕ್ತಿ ಸಂವಿಧಾನದ ನಿಯಮಗಳನ್ನು ಮೀರದಂತಿರಬೇಕು.

4. ಇತರರನ್ನು ಆಳುವುದಕ್ಕೆ ಅಧಿಕಾರ ಚಲಾಯಿಸುವುದಕ್ಕಾಗಿ ರಾಷ್ಟ್ರ ಯಾವುದೇ ವ್ಯಕ್ತಿಯನ್ನು ತನ್ನ ಪ್ರತಿನಿಧಿಯನ್ನಾಗಿ ಮಾಡಬಾರದು.

ಮೇಲೆ ಹೇಳಿದ ನಾಲ್ಕು ಅಂಶಗಳಲ್ಲಿ ಮುಖ್ಯವಾಗಿ ಕೊನೆಯ ಎರಡು ಅಂಶಗಳನ್ನು ರಾಷ್ಟ್ರ ಸಮಾಜವಾದ ಕಾಯ್ದುಕೊಳ್ಳುವುದು. ಇದರಿಂದ ಅಲ್ಪಸಂಖ್ಯಾತರನ್ನೂ ಹಾಗೂ ದಲಿತರನ್ನೂ ರಕ್ಷಿಸುವುದೇ ಇದರ ಮುಖ್ಯವಾದ ಯೋಜನೆ ಆಗಿರುವುದು. ಈ ದೇಶದಲ್ಲಿ ಕೀಳು ಕುಲದವರನ್ನು ಉತ್ತಮ ಕುಲದವರು ಗೋಳುಹೊಯ್ದುಕೊಳ್ಳುವುದನ್ನೂ ತಪ್ಪಿಸಬೇಕಾಗಿರುವುದು. ಧಾರ್ಮಿಕ ವಿಚಾರಗಳಲ್ಲಿ ಬಹಿರಂಗವಾಗಿ ಮಾತಾಡುವುದಕ್ಕೂ, ಸಾರ್ವಜನಿಕವಾಗಿ ನೀತಿಯುತವಾಗಿ ಬಾಳುವುದಕ್ಕೂ, ಬೇರೊಂದು ಧರ್ಮಕ್ಕೆ ತನ್ನ ಮಿತಿಯೊಳಗೆ ಸೇರುವುದಕ್ಕೂ ವ್ಯಕ್ತಿಗೆ ಸ್ವತಂತ್ರವಿರಬೇಕು.

ವ್ಯಕ್ತಿಯ ಮೂಲಭೂತವಾದ ಹಕ್ಕುಗಳ ಆಕ್ರಮಣ ಕಾಲದಲ್ಲಿ ಅವುಗಳನ್ನು ರಕ್ಷಿಸುವುದಕ್ಕೆ ಸರಿಯಾದ ಉಪಾಯಗಳಿರಬೇಕು ಎಂದು ಅಂಬೇಡ್ಕರ್ ತಿಳಿಸುವರು. ಹೀಗೆ ಹೇಳುತ್ತಾ ಭಾರತದ ಎಲ್ಲಾ ಕೋರ್ಟುಗಳ ಮೇಲ್ವಿಚಾರಣೆ ಮಾಡುವ ಉಚ್ಚ ನ್ಯಾಯಾಲಯಕ್ಕೆ(Supreme court), ಈ ಮೂಲಭೂತ ಹಕ್ಕುಗಳನ್ನೂ ರಕ್ಷಣೆ ಮಾಡುವ ಶಕ್ತಿ ಬಹಳವಾಗಿ ಇರುವುದು. ಅದಲ್ಲದೆ ಅಸಮಾನತಾ ಆಚರಣೆಯನ್ನೂ ತಡೆಗಟ್ಟಬೇಕಾದರೆ ಶಾಸಕಾಂಗ, ಕೇಂದ್ರೀಯ ಮಂತ್ರಿಮಂಡಲ ಮತ್ತು ರಾಷ್ಟ್ರ ಇವುಗಳಿಗೆ ಒಂದು ಮಿತಿ ಇರಲೇ ಬೇಕಾಗುವುದು.

ಹೀಗೆ ಈ ಇಡೀ ಯೋಜನೆ ಆರ್ಥಿಕ ಚೌಕಟ್ಟಿಗೂ, ರಾಜಕೀಯ ಬಿಕಟ್ಟಿಗೂ ಒಂದು ಸಮಾನ ರೇಖೆಯನ್ನೂ ರೂಪಿಸಲು ಹೊರಟಿರುವುದು. ಇದು ಅಂಬೇಡ್ಕರ್ ಅವರ ಆಲೋಚನೆಯಾದರೆ ನಾವು ನಿಜವಾಗಲೂ ಎದುರಿಸುತ್ತಿರುವ ಸಮಸ್ಯೆಗಳು ಈ ಕೆಳಕಂಡಂತೆ ಹಲವಾರು ಇರುವುವು.

(ಮುಂದುವರೆಯುವುದು)

## ಸಾಂಸ್ಕೃತಿಕ ಜಾಥಾ

ಎಲ್ಲಾ ರೀತಿಯ ಅಮಾನವೀಯ ಶೋಷಣೆಯಿಂದ ದಮನಕ್ಕೊಳಗಾದ ದಲಿತರಲ್ಲಿ ಜಾಗೃತಿ ಉಂಟು ಮಾಡಲು ದಲಿತ ಸಂಘರ್ಷ ಸಮಿತಿ ಚಿಕ್ಕಮಗಳೂರು ಜಿಲ್ಲಾ ದಲಿತ ಕಲಾ ಮಂಡಲಿ ಶಾಖೆಯ ಕಲಾವಿದರು ಡಿಸಂಬರ್ 1 ರಿಂದ 10ರವರೆಗೆ ಚಿಕ್ಕಮಗಳೂರು ತಾಲ್ಲೂಕಿನಲ್ಲಿ ಸಾಂಸ್ಕೃತಿಕ ಜಾಥಾ ನಡೆಸಿದರು.

ಕಾಲುನಡೆಗೆಯಲ್ಲಿ ತಾಲ್ಲೂಕಿನ ಬಹುತೇಕ ಗ್ರಾಮಗಳಿಗೆ ಹೋಗಿ 'ಬೆಲ್ಚಿ', 'ಪತ್ರೆ ಸಂಗಪ್ಪನ ಕಗ್ಗೊಲೆ', 'ದಲಿತರ ಬಿಡುಗಡೆ' ಮತ್ತು 'ಜೀತದ ಹಟ್ಟಿರಂಗ' ಮುಂತಾದ ನಾಟಕಗಳನ್ನು ಪ್ರದರ್ಶಿಸಿದರು.

ದಲಿತ ಯುವ ಕಲಾವಿದರು ಪ್ರದರ್ಶಿಸಿದ ನಾಟಕಗಳು ಮತ್ತು ಕ್ರಾಂತಿಕಾರಿ ಹಾಡುಗಳನ್ನು ಜನರು ಮೆಚ್ಚಿ ತಮ್ಮ ನಿಜ ಬದುಕನ್ನೇ ಹೇಳುವ ಸಾಂಸ್ಕೃತಿಕ ಕಾರ್ಯಕ್ರಮವನ್ನು ಆಸಕ್ತಿಯಿಂದ ನೋಡಿ ನಿತ್ಯವೂ ತಮ್ಮ ತಮ್ಮ ಹಳ್ಳಿಗಳಲ್ಲಿ ಆಗುತ್ತಿರುವ ಶೋಷಣೆ, ಬಗೆಗೆ ದ. ಸಂ. ಸ. ಕಾರ್ಯಕರ್ತರಲ್ಲಿ ನಿವೇದಿಸಿಕೊಂಡರು.

# ಸರ್ಕಾರಕ್ಕೆ ಆದಾಯ ಕೊಡುವ ಮದ್ಯಪಾನ ನಿಯಂತ್ರಣ–ಒಂದು ಅನಿಸಿಕೆ

[ಮಧ್ಯದ ಪುಟದಿಂದ]

| | 73-74 | 74-75 | 75-76 | 76-77 | 77-78 | 78-79 |
|---|---|---|---|---|---|---|
| ಸರ್ಕಾರದ ಅಬ್ಕಾರಿ ಆದಾಯ (ಲಕ್ಷ ರೂಗಳಲ್ಲಿ) | 3763.93 | 4753,92 | 5200.76 | 5226.61 | 5600.00 | 5800.00 |

**ಕರ್ನಾಟಕ ಬಜೆಟ್ 1978–79**

ಮೊದಲನೆಯದಾಗಿ, ಹೆಂಡ, ಸಾರಾಯಿ, ಮುಂತಾದವುಗಳು ಹೆಚ್ಚಾಗಿ ದುಡಿಯುವ ಜನರಿಗಾಗಿ ಉತ್ಪಾದನೆಯಾಗುತ್ತದೆ. ಇದಕ್ಕೆ ಕಾರಣ ಬೇರೆ ಮದ್ಯಗಳಿಗೆ ಹೋಲಿಸಿದರೆ ಇವುಗಳ ಬೆಲೆ ಕಮ್ಮಿ. ಸಾಮಾನ್ಯವಾಗಿ ದುಡಿಯುವ ಜನ ತಮ್ಮ ದೈನಿಕ ದೈಹಿಕ-ಮಾನಸಿಕ ಆಯಾಸವನ್ನು ಮರೆಯಲು ಮೊದಲು ಮದ್ಯಪಾನ ಮಾಡಲು ಪ್ರಾರಂಭಿಸುತ್ತಾರೆ. ಬರಬರುತ್ತಾ ಅದು ಚಟವಾಗಿ ಮದ್ಯ ಮನುಷ್ಯನನ್ನು ಕುಡಿಯಲು ಪ್ರೇರೆಪಿಸುತ್ತದೆ, ದುಡಿಯುವ ಜನ ಪದೇಪದೇ ಕುಡಿತಕ್ಕೆ ಬದಲಾಗಲು ಕಾರಣ ತಮ್ಮ ಜೀವನದಲ್ಲಿನ ಪರಕೀಯತೆಯೇ ಕಾರಣ.

ನಮ್ಮ ದೇಶದಲ್ಲಿ ಅತೀ ಕೆಳಗಿನ ಜಾತಿಗಳವರು ಕುಡಿತದ ಅಭ್ಯಾಸ ಬೆಳೆಸಿಕೊಂಡಿರುವುದರಿಂದ ಅವರು ಬಡವರಾಗಿದ್ದಾರೆ ಎಂದು ಹಲವರ ಹೇಳಿಕೆ. ಕಡುಬಡವರಾದ ಈ ಜಾತಿಗಳವರು ಕುಡಿಯುವುದು ತಮ್ಮ ದುಃಖವನ್ನು ಮರೆಯಲು. ಇನ್ನೊಂದು ಅಂಶವೇನೆಂದರೆ ಹಿಂದೂ ಧರ್ಮದ ಚೌಕಟ್ಟಿನಿಂದ ಹೊರಗಿದ್ದ ಅಸ್ಪೃಶ್ಯರ ಮೇಲೆ ಬ್ರಾಹ್ಮಣವಾದದ ಸಂಸ್ಕೃತಿಯ ಪ್ರಭಾವ ಅಷ್ಟಾಗಿ ಬೀಳದಿದ್ದುದರಿಂದ ಅವರ ಮೇಲೆ ಯಾವುದೇ ನಿರ್ಬಂಧವಿರಲಿಲ್ಲ. ಕುಡಿತ ತೀವ್ರವಾಗಿರುವ ಗುಡ್ಡಗಾಡು ಪ್ರದೇಶಗಳಲ್ಲಿ ಸಾಮಾನ್ಯವಾಗಿ ಎಲ್ಲರೂ ಹವಾಮಾನದ ದೃಷ್ಟಿಯಿಂದ ಕುಡಿಯುತ್ತಾರೆ.

ಎರಡನೆಯದಾಗಿ: ನಮ್ಮ ಸಮಾಜದ ಉಚ್ಚ ಮತ್ತು ಮಧ್ಯಮ ವರ್ಗದ ಉಪಯೋಗಕ್ಕೆ "ಭಾರತದಲ್ಲಿ ವಿದೇಶಿ ಮದ್ಯ ತಯಾರಾಗುತ್ತದೆ". ಉದಾ:- ವಿಸ್ಕಿ, ರಂ, ಜಿನ್, ಬೀರ್ ಇತ್ಯಾದಿ. ನೈತಿಕವಾಗಿ degenerate ಆದ ಈ ವರ್ಗಗಳಿಗೆ ಮದ್ಯಪಾನದ ಒಂದು ಅಂತಸ್ತಿನ ಪ್ರತಿಬಿಂಬ. ಈ ಮೇಲೆ ಹೇಳಿದ ವರ್ಗಗಳ ಮೌಲ್ಯಗಳು ವಿಕೃತ (pervert)ಗೊಂಡಿವೆ. ಸಾಮ್ರಾಜ್ಯಶಾಹಿ ದೇಶಗಳ ಸಂಸ್ಕೃತಿಯನ್ನು ಅನುಕರಿಸುವ ಈ ವರ್ಗಗಳು ಕುಡಿತವನ್ನು ತಮ್ಮ ಅಂತಸ್ತಿನ ಭಾಗವೆಂದು ಪರಿಗಣಿಸಿವೆ.

'ಹಸಿರುಕ್ರಾಂತಿ'ಯಿಂದ ಹೊಸದಾಗಿ ಶ್ರೀಮಂತ ಪ್ರದೇಶಗಳಲ್ಲಿ ಕುಡಿತದ ಪ್ರಮಾಣ ತೀವ್ರವಾಗಿ ಹೆಚ್ಚಿದೆ. cash crops ಗಳಿಂದ ಸಿಗುತ್ತಿರುವ ಹಣ ಬೇರೆ ಉದ್ಯಮಗಳಲ್ಲಿ ಹೂಡಲಾಗದೇ ಇರುವುದರಿಂದ ಈ ಪರಿಸ್ಥಿತಿ ಉಂಟಾಗಿದೆ. ಕರ್ನಾಟಕದಲ್ಲಿ ಇದಕ್ಕೆ ಉದಾಹರಣೆ-ಮಂಡ್ಯ ಜಿಲ್ಲೆ.

ಮೂರನೆಯದಾಗಿ- ರಫ್ತು ಮಾರುಕಟ್ಟೆಗಾಗಿ ಸಾಕಷ್ಟು ಮದ್ಯ ಉತ್ಪಾದನೆಯಾಗುತ್ತದೆ.

ಮದ್ಯಪಾನವನ್ನು ವಿರೋಧಿಸಬೇಕೆಂತಲೋ ಅಥವಾ ಸಂಯಮಗೊಳಿಸಬೇಕೆಂತಲೋ ಸರ್ಕಾರಗಳು ಮತ್ತು ಹಲವಾರು ಸಂಘ ಸಂಸ್ಥೆಗಳು ಪ್ರಯತ್ನಿಸುತ್ತವೆ. ಇವರೆಲ್ಲರಿಗೂ ಸಹ ಮದ್ಯಪಾನ ಒಂದು ನೈತಿಕ ಮೌಲ್ಯಗಳ ಪ್ರಶ್ನೆ. ಆದರೆ ವಾಸ್ತವವಾಗಿ ಈ ದೇಶದ ದಳ್ಳಾಳಿ ಬಂಡವಾಳಗಾರರ, ಭೂಸ್ವಾಮಿಗಳ ಪ್ರಭುತ್ವ, ಇದು ನೈತಿಕ ಮೌಲ್ಯಗಳ ಸಮಸ್ಯೆಯೆಂದು ಹೊರಗೆ ಪ್ರಚಾರ ಮಾಡಿದರೂ ಸಹ ಅಂತರಿಕವಾಗಿ ತನ್ನ ಆದಾಯದ ಒಂದು ಭಾಗವನ್ನಾಗಿ ಅಬ್ಕಾರಿಯನ್ನು ಮಾಡಿಕೊಂಡಿದ್ದರಿಂದ ಜನರು ಕುಡಿಯುವುದನ್ನೇ ಹೆಚ್ಚಲು ಪ್ರಯತ್ನ ಮಾಡುತ್ತಿದೆ. ಪ್ರಭುತ್ವಕ್ಕೆ ಆದಾಯಬೇಕು, ವರ್ಷದಿಂದ ವರ್ಷಕ್ಕೆ ಅಬ್ಕಾರಿ ಸುಂಕ ಹೆಚ್ಚುತ್ತಲೇ ಇದೆ, ಮೇಲೆ ಕೊಟ್ಟ ಪಟ್ಟಿಯಿಂದ ಇದು ಸ್ಪಷ್ಟವಾಗುತ್ತದೆ.

ಎಲ್ಲಿಯವರೆಗೆ ಮದ್ಯ ಸರ್ಕಾರದ ಆದಾಯದ ಅಂಶವನ್ನಾಗಿ ಪರಿಗಣಿಸಿ ನಿಯಂತ್ರಣಗಳನ್ನು ಮಾಡುತ್ತಿರುತ್ತಿದೆಯೋ, ಅಲ್ಲಿಯವರೆಗೆ ಕಳ್ಳಭಟ್ಟಿಗಳು ಹೆಚ್ಚುತ್ತಲೇ ಇರುತ್ತವೆ. ಬಡವರು ಸಾಮಾನ್ಯವಾಗಿ ಕಡಿಮೆ ಬೆಲೆಯಲ್ಲಿ ಸಿಗುವ ಈ ಮದ್ಯಗಳಿಗೆ ಶರಣು ಹೋಗುತ್ತಾರೆ. ಕಳ್ಳಭಟ್ಟಿಗಳನ್ನು ನಡೆಸುವವರಿಗೆ ಬಂಡವಾಳಶಾಹಿಗಳ indirect ಸಂಬಂಧ, ಪೋಲೀಸರ ಮತ್ತು ಅಬ್ಕಾರಿ ಇಲಾಖೆಯ ಒಳೊಳಗಿನ ಸಹಕಾರ ವಿರುತ್ತದೆ. ಯಾಕೆಂದರೆ ಭ್ರಷ್ಟಚಾರ ಈ ದೇಶದ ಎಲ್ಲಾ ಮಟ್ಟಗಳಲ್ಲಿಯೂ ತುಂಬಿತುಳುಕುತ್ತದೆ. ಪಾಶ್ಚಿಮಾತ್ಯ ದೇಶಗಳಲ್ಲಿ ಭ್ರಷ್ಟಾಚಾರ ಉನ್ನತ ವಲಯಗಳಲ್ಲಿದ್ದರೆ, ನಮ್ಮ ದೇಶದಲ್ಲಿ ಅದು ಎಲ್ಲಾ ಮಟ್ಟಗಳಲ್ಲಿ ಇದೆ. ಹೀಗಾಗಿ ಯಾವುದೇ ನಿರೋಧ. ನಿಯಂತ್ರಣಗಳು ಮದ್ಯದ ಉತ್ಪಾದನೆಯನ್ನು ಸಮಾಜ ವಿರೋಧಿಯನ್ನಾಗಿಸುತ್ತವೆ (A social production).

ಹೊಟ್ಟೆಗಿಲ್ಲದಿದ್ದರೂ ಸಹ ಬಡ ದುಡಿಯುವ ಜನರು ಮತ್ತು ಕೆಳ ಜಾತಿಗಳವರು ಕುಡಿತದ ಚಟಕ್ಕೆ ಬಲಿಯಾಗಲು ಕಾರಣವಾದ ಇಂದಿನ ಆರ್ಥಿಕ ಮತ್ತು ಸಾಮಾಜಿಕ ವ್ಯವಸ್ಥೆಯ ಕೊಳೆಯುವಿಕೆ ನಿರ್ನಾಮವಾಗುವುದಿಲ್ಲವೋ ಅಲ್ಲಿಯವರೆಗೆ ಮದ್ಯಪಾನದ ನಿಯಂತ್ರಣ ಅಸಂಭವದ ಮಾತು.

**ಅನುಸೂಯಮ್ಮನ ಮೇಲೆ ಮತ್ತೆ ಹಲ್ಲೆ**

ಇತ್ತೀಚೆಗೆ ಜಮೀನು ವಿವಾದ ದ್ವೇಷದಿಂದ ಮಾಲೂರು ತಾಲ್ಲೂಕು ಹುಣಸಿಕೋಟೆ ಗ್ರಾಮದ ಬಡಕುಂಬಾರ ಶೇಷಗಿರಿಯಪ್ಪ ಎಂಬುವವರ ವಿಧವೆ ಮಗಳಾದ ಅನುಸೂಯಮ್ಮನ ಮೇಲೆ ತಾಲ್ಲೂಕು ಬೋರ್ಡ್ ಅಧ್ಯಕ್ಷ ಕೃಷ್ಣೇಗೌಡ ಮತ್ತವನ ತಮ್ಮಂದಿರು ನಡೆಸಿದ ಅಮಾನುಷ ಅತ್ಯಾಚಾರದ ನಂತರ ಮತ್ತೆ ಡಿಸೆಂಬರ್ 20 ರಂದು ಹಲ್ಲೆ ನಡೆಸಿದ್ದಾರೆ.

ಈ ಪತ್ರಿಕೆಯು ರಾಮದೇವ ರಾಕೆಅವರ ಸಂಪಾದಕತ್ವದಲ್ಲಿ, ನೂತನ್ ಪ್ರಿಂಟಿಂಗ್ ಪ್ರೆಸ್, ಬೆಂಗಳೂರು-3 ಇಲ್ಲಿ ಮುದ್ರಿಸಲ್ಪಟ್ಟು ಗೋವಿಂದಯ್ಯ ಅವರಿಂದ ಪ್ರಕಟಿಸಲ್ಪಟ್ಟಿತು. ವಿಳಾಸ: 5ಎ ವಾಣಿ ವಾಣಿಜ್ಯಶಾಲಾ, ಪತ್ರಕರ್ತರ ಕಾಲೋನಿ. ಬೆಂಗಳೂರು-560002.